# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 48(81) |
| ಸದಸ್ಯರ ಹೆಸರು | | ಶ್ರೀ ಮರಿತಿಬ್ಬೇಗೌಡ |
| ಉತ್ತರಿಸಬೇಕಾದ ದಿನಾಂಕ | | 21.09.2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ) | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು ಹಾಗೂ ವಿಶ್ವವಿದ್ಯಾಲಯಗಳಲ್ಲಿ ಕಳೆದ ಶೈಕ್ಷಣಿಕ ವರ್ಷದಲ್ಲಿ ಕಾರ್ಯನಿರ್ವಹಿಸಿದ ಅತಿಥಿ ಉಪನ್ಯಾಸಕರ ಸೇವೆಯನ್ನು ಪ್ರಸಕ್ತ ಶೈಕ್ಷಣಿಕ ಸಾಲಿಗೂ ಮುಂದುವರೆಸಲು ಸರ್ಕಾರ ತೀರ್ಮಾನಿಸಿದೆಯೇ; | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರಸಕ್ತ ಸಾಲಿನಲ್ಲಿ ಕೋವಿಡ್-19 ಹಿನ್ನೆಲೆಯಲ್ಲಿ ಕಾಲೇಜುಗಳಲ್ಲಿ ತರಗತಿಗಳು ಪ್ರಾರಂಭವಾಗದೇ ಇರುವುದರಿಂದ ಅತಿಥಿ ಉಪನ್ಯಾಸಕರನ್ನು ಆಯ್ಕೆ ಮಾಡಿಕೊಂಡಿರುವುದಿಲ್ಲ. ಹಾಗೂ ವಿಶ್ವವಿದ್ಯಾಲಯಗಳಲ್ಲಿ ಅತಿಥಿ ಉಪನ್ಯಾಸಕರ ಸೇವೆಯನ್ನು ಮುಂದುವರೆಸಲು ಯಾವುದೇ ತೀರ್ಮಾನ ತೆಗೆದುಕೊಂಡಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಈ ಸಂಬಂಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಇ) | ಅವರ ಗೌರವಧನ ಪರಿಷ್ಕರಣೆ ಮಾಡಲು ಸರ್ಕಾರ ಚಿಂತಿಸಿದೆಯೇ; | ಸರ್ಕಾರದ ಆದೇಶ ಸಂಖ್ಯೆ:ಇಡಿ/66/ಡಿಸಿಇ/2017, ದಿನಾಂಕ:04.04.2017 ರನ್ವಯ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ಶೇ.55ರಷ್ಟು ಅಂಕಗಳನ್ನು ಪಡೆದು ಎನ್‌ಇಟಿ/ಎಸ್‌ಎಲ್‌ಇಟಿ ಅಥವಾ ಪಿ.ಹೆಚ್‌ಡಿ ಹೊಂದಿರುವ ಅತಿಥಿ ಉಪನ್ಯಾಸಕರಿಗೆ ಮಾಸಿಕ ಗೌರವಧನ ರೂ.13,000/- ಹಾಗೂ ಸ್ನಾತಕೋತ್ತರ ಪದವಿ ಪಡೆದ ಅತಿಥಿ ಉಪನ್ಯಾಸಕರಿಗೆ ರೂ.11,000/- ಗಳನ್ನು ಪಾವತಿಸಲಾಗುತ್ತಿದೆ.<br><br>ಪ್ರಸ್ತುತ ರಾಜ್ಯದಲ್ಲಿ ತಲೆದೂರಿರುವ ಕೋವಿಡ್-19 ಹಿನ್ನೆಲೆಯಲ್ಲಿ ಉಂಟಾಗಿರುವ ಆರ್ಥಿಕ ಮುಗಟ್ಟಿನ ಹಾಗೂ ಈ ಸಂಬಂಧ ಇರುವ ಆರ್ಥಿಕ ನಿರ್ಬಂಧನೆಯ ಹಿನ್ನೆಲೆಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವವರಿಗೆ ಗೌರವಧನ ಹೆಚ್ಚಿಸಲು ಸಾಧ್ಯವಿರುವುದಿಲ್ಲವೆಂದು ಆರ್ಥಿಕ ಇಲಾಖೆಯು ತಿಳಿಸಿರುತ್ತದೆ. |
| ಈ) | ಹಾಗಿದ್ದಲ್ಲಿ, ಯಾವ ಪ್ರಮಾಣದಲ್ಲಿ ಗೌರವಧನ ಪರಿಷ್ಕರಣೆ ಮಾಡಲಾಗುವುದು; | |

| | | |
|---|---|---|
| ಉ) | ಸಹಾಯಕ ಪ್ರಾಧ್ಯಾಪಕರ ಮುಂದಿನ ನೇಮಕಾತಿಗಳಲ್ಲಿ ಅತಿಥಿ ಉಪನ್ಯಾಸಕರಿಗೆ ಕೃಪಾಂಕ ನೀಡಿ ವಯೋಮಿತಿ ಸಡಿಲಿಕೆ ಮಾಡಲಾಗುವುದೆ; | ಅತಿಥಿ ಉಪನ್ಯಾಸಕರಿಗೆ ಸೇವಾ ಕೃಂಪಾಂಕ ನೀಡುವುದನ್ನು ಪ್ರಶ್ನಿಸಿ ಶ್ರೀ ಜಗನ್ನಾಥ್ ಮತ್ತು ಇತರರು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ 953–959/2009 ರ ಮೇಲೆ ದಿ:19.08.2009 ರಂದು ನೀಡಿದ ತೀರ್ಪಿನಲ್ಲಿ ಅತಿಥಿ ಉಪನ್ಯಾಸಕರಿಗೆ ಕೃಂಪಾಂಕ ನೀಡುವುದು ನಿಯಮ ಬಾಹಿರವಾಗಿರುತ್ತದೆ ಎಂಬ ನಿಲುವನ್ನು ವ್ಯಕ್ತಪಡಿಸಿರುತ್ತದೆ. ಈ ತೀರ್ಪನ್ನು ಪ್ರಶ್ನಿಸಿ ಶ್ರೀ ಶಂಕರ ಬಮಾಣಿ ಮತ್ತು ಇತರರು ಮಾನ್ಯ ಉಚ್ಛ ನ್ಯಾಯಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:26902–206914/2009(ಎಸ್–ಕೆಎಟಿ) ಸಲ್ಲಿಸಿದ್ದು, ಸದರಿ ರಿಟ್ ಅರ್ಜಿಗಳ ಮೇಲೆ ಮಾನ್ಯ ಉಚ್ಛ ನ್ಯಾಯಾಲಯವು ದಿನಾಂಕ:08.07.2013 ರಂದು ನೀಡಿರುವತೀರ್ಪಿನಲ್ಲಿ ಮಾನ್ಯ ಕೆ.ಎ.ಟಿ.ಯು ನೀಡಿರುವ ತೀರ್ಪನ್ನು ಪುನರುಚ್ಛರಿಸಿರುತ್ತದೆ. ಈ ತೀರ್ಪನ್ನು ಪ್ರಶ್ನಿಸಿ ಶ್ರೀ ಶಂಕರ ಬಮಾಣಿ ಮತ್ತು ಇತರರು ಮಾನ್ಯ ಸರ್ವೋಚ್ಛ ನ್ಯಾಯಲಯದಲ್ಲಿ ಎಸ್‌ಎಲ್‌ಪಿ ಯನ್ನು ಸಲ್ಲಿಸಿದ್ದು, ಸದರಿ ಪ್ರಕರಣ ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ.<br><br>ಈ ಹಿನ್ನೆಲೆಯಲ್ಲಿ ಅತಿಥಿ ಉಪನ್ಯಾಸಕರಿಗೆ ವಯೋಮಿತಿ ಸಡಿಲಿಕೆ ಹಾಗೂ ಸೇವಾ ಕೃಂಪಾಂಕ ನೀಡಲು ಅವಕಾಶ ಇರುವುದಿಲ್ಲ. |
| ಊ) | ಹಾಗಾದಲ್ಲಿ, ಯಾವ ಪ್ರಮಾಣದ ಕೃಪಾಂಕ ಮತ್ತು ವಯೋಮಿತಿ ಸಡಿಲಿಕೆ ಮಾಡಲಾಗುವುದು? | |

ಇಡಿ 159 ಡಿಸಿಇ 2020

(ಡಾ. ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)